CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಏಪ್ರಿಲ್ ೧೫, ೨೦೦೪ (ಚೈತ್ರ ೨೬, ಶಕ ವರ್ಷ ೧೯೨೬) | ಸಂಚಿಕೆ ೧೬ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ವಿಷಯಃ ಮೈಸೂರು ವೈದ್ಯಕೀಯ ಕಾಲೇಜಿನ ಪ್ರಸೂತಿ ಮತ್ತು ಸ್ತ್ರೀರೋಗಶಾಸ್ತ್ರ ಉಪನ್ಯಾಸಕರಾದ ಡಾಃವಿಜಯಲಕ್ಷ್ಮಿ ತೋನ್ಸೆ ರವರ ವಿರುದ್ದ ಇಲಾಖಾ ವಿಚಾರಣೆ.

ಓದಲಾಗಿದೆಃ

1. ತಾಃ 19.06.1985 ಸಂಖ್ಯೆಃ ವಶ್ರೇಅ(3)8:85-86ರ ವೈದ್ಯಕೀಯ ನಿರ್ದೇಶಕರ ಪತ್ರ
2. ತಾಃ 14.11.1985 ಸಂಖ್ಯೆಃ ಆಕುಕ 71 ಎಂಸಿಎಲ್ 85ರ ನೋಟೀಸ್
3. ತಾಃ 17.07.1987 ಸಂಖ್ಯೆಃವಶ್ರೇಅ(3)ಃ8ಃ85-86ರ ವೈದ್ಯಕೀಯ ನಿರ್ದೇಶಕರ ಪತ್ರ
4. ತಾಃ 14.12.1989 ಸಂಖ್ಯೆಃ ಆಕುಕ 71 ಎಂಸಿಎಲ್ 85ರ ಸರ್ಕಾರಿ ಆದೇಶ
5. ತಾಃ 20.03.1990 ಸಂಖ್ಯೆಃ ಜೆಡಿಎಂಇಃ260ಃ90-91ರ ವೈದ್ಯಕೀಯ ಶಿಕ್ಷಣ ಜಂಟಿ ನಿರ್ದೇಶಕರು ಹಾಗೂ ವಿಚಾರಣಾಧಿಕಾರಿರವರ ಪತ್ರ
6. ತಾಃ 27.04.1991 ಸಂಖ್ಯೆಃ ಜೆಡಿಎಂಇಃಇಎನ್‌ಕ್ಯು .ಕೇಸ್ಃ2ಃ90-91ರ ವೈದ್ಯಕೀಯ ಶಿಕ್ಷಣ ಜಂಟಿ ನಿರ್ದೇಶಕರು ಮತ್ತು ವಿಚಾರಣಾ ಪ್ರಾಧಿಕಾರಿರವರ ಪತ್ರ
7. ತಾಃ 30.09.1994 ಸಂಖ್ಯೆಃ ಆಕುಕ 71 ಎಂಸಿಎಲ್ 85ರ ಸರ್ಕಾರಿ ಆದೇಶ
8. ತಾಃ 21.10.1994 ಸಂಖ್ಯೆಃ ಆಕುಕ 71 ಎಂಸಿಎಲ್ 85ರ ನೋಟೀಸ್
9. ತಾಃ 03.05.1995 ಸಂಖ್ಯೆಃ ವಶ್ರೇಅ(3)ಃ8ಃ85-86ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
10. ತಾಃ 20.05.1995ರ ಪ್ರಜಾವಾಣಿ ಮತ್ತು ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ ಪ್ರಕಟಣೆ
11. ತಾಃ 29.06.1995 ಸಂಖ್ಯೆಃ ವಶ್ರೇಅ(3)8ಃ85-86ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
12. ತಾಃ 06.02.1996 ಸಂಖ್ಯೆಃ ವಶ್ರೇಅ(3)8ಃ85-86ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
13. ತಾಃ 31.08.1996 ಸಂಖ್ಯೆಃ ಆಕುಕ 71 ಎಂಸಿಎಲ್ 85ರ ಸರ್ಕಾರಿ ಪತ್ರ
14. ತಾಃ 03.10.1997 ಸಂಖ್ಯೆಃ ಆಕುಕ 71 ಎಂಸಿಎಲ್ 85ರ ಸರ್ಕಾರಿ ಪತ್ರ
15. ತಾಃ 06.11.1997 ಸಂಖ್ಯೆಃ ವಶ್ರೇಅ(3)8ಃ85—86ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ
16. ತಾಃ 09.12.1999 ಸಂಖ್ಯೆಃ ಆಕುಕ 71 ಎಂಸಿಎಲ್ 85ರ ಸರ್ಕಾರಿ ಪತ್ರ
17. ತಾಃ 05.09.2002 ಸಂಖ್ಯೆಃ ಡಿಜೆ(ಆರ್)ಇಎನ್‌ಕ್ಯುಃ07ಃ99-2000ದ ವಿಚಾರಣಾ ಪ್ರಾಧಿಕಾರಿಯವರ ಪತ್ರ
18. ತಾಃ 10.12.2002 ಸಂಖ್ಯೆಃ ಆಕುಕ 71 ಎಂಸಿಎಲ್ 85ರ 2ನೇ ಕಾರಣ ಕೇಳುವ ನೋಟೀಸ್
19. ತಾಃ 21.02.2003 ಸಂಖ್ಯೆಃ ಆಕುಕ 71 ಎಂಸಿಎಲ್ 85ರ ಅರೆಸರ್ಕಾರಿ ಪತ್ರ
20. ತಾಃ 06.03.2003ರ ಕನ್ನಡ ಪ್ರಭ ಪತ್ರಿಕೆಯ ಪ್ರಕಟಣೆ

ಪೀಠಿಕೆಃ

೧. ಮೈಸೂರು ವೈದ್ಯಕೀಯ ಕಾಲೇಜಿನ ಒಬಿಜಿ ಉಪನ್ಯಾಸಕರಾದ ಡಾಃವಿಜಯಲಕ್ಷ್ಮಿ ತೋನ್ಸೆ ರವರು ತಾಃ 21.08.1984 ರಿಂದ ಕರ್ತವ್ಯದಿಂದ ಅನಧಿಕೃತವಾಗಿ ಗೈರುಹಾಜರಾಗಿದ್ದರು. 1957ರ ಕೆಸಿಎಸ್(ಸಿಸಿಎ)ನಿಯಮಾವಳಿಯ 11ನೇ ನಿಯಮದಡಿ ಅವರ ವಿರುದ್ದ

ದೋಷಾರೋಪಣಾ ಪಟ್ಟಿಯನ್ನು ತಾಃ 14.11.1985ರ ನೋಟೀಸ್‌ನಲ್ಲಿ ರೂಪಿಸಲಾಗಿತ್ತು, ಅವರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರಲಿಲ್ಲ. ತಾಃ 31.12.1985 ಮತ್ತು 03.01.1986ರ ಡೆಕ್ಕನ್ ಹೆರಾಲ್ಡ್ ಮತ್ತು ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ ಅವರ ಅನಧಿಕೃತ ಗೈರುಹಾಜರಿಯನ್ನು ಅಧಿಸೂಚಿಸಿ ಇಲಾಖಾ ವಿಚಾರಣೆ ಜರುಗಿಸಲಾಗಿರುವುದನ್ನು ಬಿಂಬಿಸಲಾಗಿತ್ತು, ಯಾವುದೇ ಪ್ರತಿಕ್ರಿಯೆ ಇರಲಿಲ್ಲ. ತಾಃ 14.12.1988ರ ಸರ್ಕಾರಿ ಆದೇಶದಲ್ಲಿ ವಿಚಾರಣಾ ಪ್ರಾಧಿಕಾರವನ್ನು ನೇಮಿಸಲಾಗಿತ್ತು, ಆಪಾದಿತರು ವಿಚಾರಣೆಗೆ ಹಾಜರಾಗದ ಕಾರಣ ವಿಚಾರಣಾ ಪ್ರಾಧಿಕಾರ : ವೈದ್ಯಕೀಯ ಶಿಕ್ಷಣ ಜಂಟಿ ನಿರ್ದೇಶಕರು ವಿಚಾರಣೆ ರಹಿತವಾಗಿ 14ನೇ ನಿಯಮದಡಿ ಆಪಾದಿತರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಅಗತ್ಯವಿಲ್ಲವೆಂದು ತಿಳಿಸಿದರು. ಅಲ್ಲದೆ ತಾಃ 27.04.1991ರಂದು ವಿಚಾರಣಾ ವರದಿಯನ್ನು ಸಲ್ಲಿಸಿ ಆರೋಪಣೆ ಸಾಬೀತಾಗಿದೆ ಎಂದು ಫೈಂಡಿಂಗ್ಸ್ ನೀಡಿದ್ದರು. ಇಲಾಖಾ ವಿಚಾರಣೆಯ ನಡವಳಿಯಲ್ಲಿ ದೋಷವಿತ್ತು ಎಂಬ ಕಾರಣದ ಮೇಲೆ ತಾಃ 30.09.1994ರ ಸರ್ಕಾರಿ ಆದೇಶದಲ್ಲಿ ಸಂಪೂರ್ಣ ಇಲಾಖಾ ವಿಚಾರಣೆಯನ್ನು ಹಿಂತೆಗೆದುಕೊಳ್ಳಲಾಯಿತು. ತಾಃ 21.10.1994ರ ನೋಟೀಸ್‌ನಲ್ಲಿ ಮತ್ತೆ ನವ್ಯವಾಗಿ ದೋಷಾರೋಪಣಾ ಪಟ್ಟಿಯುನ್ನು ರೂಪಿಸಲಾಗಿತ್ತು, ಅದು ಜಾರಿಯಾಗಲಿಲ್ಲ. ಆದ್ದರಿಂದ ತಾಃ 20.05.1995ರ ಪ್ರಜಾವಾಣಿ ಮತ್ತು ಸಂಯುಕ್ತ ಕರ್ನಾಟಕದಲ್ಲಿ ಅವರ ಗೈರುಹಾಜರಿ ದುರ್ನಡತೆಯ ಮೇಲೆ ಹೂಡಲಾಗಿರುವ ಇಲಾಖಾ ವಿಚಾರಣೆಯನ್ನು ಪ್ರಕಟಿಸಲಾಗಿತ್ತು, ಯಾವುದೇ ಪ್ರತಿಕ್ರಿಯೆ ಇರಲಿಲ್ಲ. ಅವರನ್ನು ಸೇವೆಯಿಂದ ವಜಾ ಮಾಡಲು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಶಿಫಾರಸ್ಸು ಮಾಡಿದ್ದರು. ಅದರಂತೆ ತಾಃ 31.08.1996ರ ಸರ್ಕಾರಿ ಪತ್ರದಲ್ಲಿ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು, ತಾಃ 03.10.1997ರ ತಿಳುವಳಿಕೆ ಪತ್ರದಲ್ಲಿ ವಿಚಾರಣೆ ವರದಿಯನ್ನು ಲಗತ್ತಿಸಿ ಅದನ್ನು ಏಕೆ ಅಂಗೀಕರಿಸಬಾರದು ಎಂಬುದರ ಮೇಲೆ 15ದಿನಗಳಲ್ಲಿ ಉತ್ತರಿಸುವಂತೆ ಕೋರಲಾಗಿತ್ತು, ಯಾವುದೇ ಪ್ರತಿಕ್ರಿಯೆ ಇರಲಿಲ್ಲ. ಅನಂತರ ತಾಃ 09.12.1999ರ ಸರ್ಕಾರಿ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶ ಶ್ರೀ ಎಸ್.ವಿ.ತಿಲ್‌ಗುಲ್ ರವರನ್ನು ವಿಚಾರಣಾ ಪ್ರಾಧಿಕಾರವಾಗಿ ನೇಮಿಸಲಾಗಿತ್ತು, ತಾಃ 01.09.2001ರ ವಿಚಾರಣಾ ವರದಿಯಲ್ಲಿ ಅವರ ವಿರುದ್ಧ ರೂಪಿಸಲಾಗಿದ್ದ ತಾಃ 21.06.1984 ರಿಂದ ಅನಧಿಕೃತ ಗೈರುಹಾಜರಿಯ ದೋಷರೋಪಣೆ ಸಾಬೀತಾಗಿದೆ ಎಂಬ ಫೈಂಡಿಂಗ್ಸ್ ಅನ್ನು ನೀಡಿದ್ದರು. ತಾಃ 10.12.2002ರ 2ನೇ ಕಾರಣ ಕೇಳುವ ನೋಟೀಸ್‌ನಲ್ಲಿ ಅವರಿಗೆ ವಿಚಾರಣಾ ವರದಿಯನ್ನು ಒದಗಿಸಿ ಅದನ್ನು ಏಕೆ ಅಂಗೀಕರಿಸಬಾರದು ಎಂಬುದರ ಮೇಲೆ ಕಾರಣ ಸೂಚಿಸುವಂತೆ ಕೋರಲಾಗಿತ್ತು, ಅದು ಹಿಂತಿರುಗಿತ್ತು, ಆದ್ದರಿಂದ ತಾಃ06.03.2003ರಂದು ಅದನ್ನು ಕನ್ನಡ ಪ್ರಭ ಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿತ್ತು, ಅದಕ್ಕೂ ಯಾವುದೇ ಪ್ರತಿಕ್ರಿಯೆ ಅಭಿವ್ಯಕ್ತವಾಗಿಲ್ಲ. ಆದ್ದರಿಂದ ಏಕಪಕ್ಷೀಯವಾಗಿ ಇವರ ವಿರುದ್ಧ ಅಂತಿಮ ಆದೇಶವನ್ನು ಹೊರಡಿಸುವುದು ಅನಿವಾರ್ಯವಾಗಿದೆ.

೨. ಮೇಲ್ಕಂಡ ಸನ್ನಿವೇಶದಲ್ಲಿ ಆಪಾದಿತರು ಮೇಲೆ ನಮೂದಿಸಿರುವ ಅವಧಿಯಲ್ಲಿ ಕರ್ತವ್ಯಕ್ಕೆ ಗೈರುಹಾಜರಾಗಿದ್ದರು ಎಂಬುದು ಸಕಲ ವಲಯಗಳಿಂದ ಸಾಬೀತಾಗಿದೆ.

೩. ಎರಡನೇ ಕಾರಣ ಕೇಳುವ ನೋಟೀಸ್‌ಗೆ ಆಪಾದಿತರು ಉತ್ತರವನ್ನು ನೀಡದೇ ಇರುವುದರಿಂದ, ವಿಚಾರಣಾ ವರದಿಯನ್ನು ಪುರಸ್ಕರಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 108ನೇ ನಿಯಮ ಹಾಗೂ 1957ರ ಕೆಸಿಎಸ್(ಸಿಸಿಎ) ನಿಯಮಾವಳಿಯ 8(viii )ನೇ ನಿಯಮದೊಂದಿಗೆ ಓದಲಾದ ತಾಃ 14.09.2001 ಸಂಖ್ಯೆಃ ಸಿಆಸುಇ 18 ಸೇಇವಿ2001ರ ಸುತ್ತೋಲೆಯ ಪ್ರಕಾರ ಆಪಾದಿತರನ್ನು ಸೇವೆಯಿಂದ ವಜಾ ಮಾಡಲು ಸರ್ಕಾರವು ನಿಶ್ಚಯಿಸಿದೆ.

ಸರ್ಕಾರಿ ಆದೇಶ ಸಂಖ್ಯೆಃ ಆಕುಕ 39 ಎಂಸಿಎಲ್ 2004, ಬೆಂಗಳೂರು, ದಿನಾಂಕಃ20ನೇ ಮಾರ್ಚ್ 2004

೪. ಮೈಸೂರು ವೈದ್ಯಕೀಯ ಕಾಲೇಜಿನ ಪ್ರಸೂತಿ ಮತ್ತು ಸ್ತ್ರೀರೋಗಶಾಸ್ತ್ರ ಉಪನ್ಯಾಸಕರಾದ ಡಾಃವಿಜಯಲಕ್ಷ್ಮಿ ತೋನ್ಸೆ ರವರ ಮೇಲೆ 1957ರ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಯ 8(viii) ನೇ ನಿಯಮದಡಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ ಮತ್ತು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆ.

೫. ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು ವಿದ್ಯುಕ್ತವಾದ ಆದೇಶವನ್ನು ಹೊರಡಿಸಿ ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ತವ್ಯದಿಂದ ವಿಮುಕ್ತಿಗೊಳಿಸಿ ಅದರ ಪ್ರತಿಯನ್ನು ತ್ವರಿತವಾಗಿ ಸರ್ಕಾರಕ್ಕೆ, ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಮತ್ತು ಮಹಾಲೇಖಪಾಲರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 387

ಎಸ್. ನಾಗರಾಜು

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ಕಾನೂನು ಸಚಿವಾಲಯ

**ವಿಷಯ:** 2003-04ನೇ ಸಾಲಿಗೆ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 40 ಎಲ್ಎಡಿ 2003, ದಿನಾಂಕ: 22-11-03.
2. ದಿನಾಂಕ:23-2-2003ರ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಬೆಂಗಳೂರು ಇವರ ಪತ್ರ ಸಂಖ್ಯೆ:ಕರಾಕಾಸೇಪ್ರಾ:ಅಕೌಂಟ್ಸ್:71:2003-04.

**ಪ್ರಸ್ತಾವನೆ:**

2003-2004ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಉಚಿತ ಕಾನೂನು ನೆರವು, ಕಾನೂನು ಸಾಕ್ಷರತಾ ಆಂದೋಳನ ಕಾರ್ಯಕ್ರಮ ಕಾನೂನು ಶಿಬಿರದ ಮೂಲಕ ಉಚಿತ ಕಾನೂನು ಸಲಹೆ ನೀಡುವುದು ಹಾಗೂ ಜನತಾ ನ್ಯಾಯಾಲಯ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ರೂ.102.48 ಲಕ್ಷಗಳನ್ನು ಸಹಾಯಾನುದಾನವಾಗಿ ನೀಡಲು ಒದಗಿಸಿದೆ.

ಮೇಲೆ ಕ್ರಮಾಂಕ (1)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ರೂ.50.00 (ಐವತ್ತು ಲಕ್ಷಗಳು ಮಾತ್ರ) ಪ್ರಥಮ ಕಂತು ಸಹಾಯಾನುದಾನವನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರವು ಮೇಲೆ ನಮೂದಿಸಲಾಗಿರುವ ಕಾರ್ಯಕ್ರಮಗಳನ್ನು ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಉಚ್ಚ ನ್ಯಾಯಾಲಯದ ಕಾನೂನು ಸೇವಾ ಸಮಿತಿ, ಹಾಗೂ ತಾಲ್ಲೂಕು ಕಾನೂನು ಸೇವಾ ಸಮಿತಿಗಳ ಮೂಲಕ ಹಮ್ಮಿಕ್ಕೊಳ್ಳಲು ಹಾಗೂ ಪ್ರಾಧಿಕಾರದ ಮತ್ತು ಅಧೀನ ಕಛೇರಿಗಳ ಸಿಬ್ಬಂದಿ ವರ್ಗದ ವೇತನ ಭತ್ಯೆ ಹಾಗೂ ಕಛೇರಿ ವೆಚ್ಚಗಳಿಗೆ ಪೂರ್ಣ ಪ್ರಮಾಣದ ಸಹಾಯಾನುದಾನದ ಅವಶ್ಯಕತೆ ಇರುವುದಾಗಿ ಉಳಿದ ಮೊತ್ತ ರೂ.52.48 ಲಕ್ಷ ಬಿಡುಗಡೆ ಮಾಡುವಂತೆ ಮೇಲೆ ಓದಲಾಗಿರುವ ಕ್ರಮಾಂಕ (2)ರ ದಿನಾಂಕ:23-2-2004ರ ಪತ್ರದಲ್ಲಿ ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಬೆಂಗಳೂರು ಇವರು ಕೋರಿರುವರು.

**ಸರ್ಕಾರಿ ಆದೇಶ ಸಂಖ್ಯೆ: ಲಾ 40 ಎಲ್‌ಎಡಿ 2003, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2004**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸರ್ಕಾರವು ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ 2003-04ನೇ ಸಾಲಿನ ಲೆಕ್ಕ ಶೀರ್ಷಿಕೆ "2235-ಸಾಮಾಜಿಕ ಭದ್ರತೆ ಮತ್ತು ಕಲ್ಯಾಣ-60-200-ಇತರೆ ಕಾರ್ಯಕ್ರಮಗಳು-5-(01 ರಿಂದ 10)-101 ಸಹಾಯಾನುದಾನ (ಯೋಜನೇತರ)" ಅಡಿಯಲ್ಲಿ ಸಹಾಯಾನುದಾನ ನೀಡಲು ಒದಗಿಸಲಾಗಿರುವ ಅನುದಾನದಿಂದ ರೂ.20.00 ಲಕ್ಷ (ರೂಪಾಯಿಗಳು ಇಪ್ಪತ್ತು ಲಕ್ಷಗಳು ಮಾತ್ರ) ಅಂತಿಮ ಕಂತಾಗಿ ಸಹಾಯಾನುದಾನವನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರು ಮಾಡಿದೆ.

1) ಯೋಜಿತ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಿರುವ ಕುರಿತು ವಿವರವಾದ ವರದಿ ನೀಡುವುದು.
2) ಪ್ರಸ್ತುತ ಮಂಜೂರು ಮಾಡಲಾಗಿರುವ ಅನುದಾನಕ್ಕೆ ಉಪಯುಕ್ತತಾ ಪ್ರಮಾಣ ಪತ್ರವನ್ನು ತಕ್ಷಣವೇ ಸಲ್ಲಿಸುವುದು.
3) ಬಿಡುಗಡೆಗೊಳಿಸಲಾಗಿರುವ ಮೊತ್ತವನ್ನು ಯಾವ ಯಾವ ಉಪ ಲೆಕ್ಕ ಶೀರ್ಷಿಕೆಗಳಿಗೆ ಉಪಯೋಗಿಸಲಾಗಿದೆ ಎಂಬುದರ ಬಗ್ಗೆ ಮಾಹಿತಿ.

ಈ ಮೊತ್ತದ ಅನುದಾನ ಬಿಲ್ಲಿಗೆ ಕಾನೂನು ಇಲಾಖಾ ಕಾರ್ಯದರ್ಶಿಯವರ ಮೇಲು ರುಜು ಪಡೆಯುವ ಮೂಲಕ ಹಣ ಪಡೆಯಲು ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 259 ವೆಚ್ಚ 7:04 ದಿನಾಂಕ:23-03-2003 ರಲ್ಲಿ ನೀಡಲಾಗಿರುವ ಸಹಾನುಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 388

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಕೆ.ಟಿ. ವಿಜಯರಾಜ್ ಅರಸ್, ನಿವೃತ್ತ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಅಮಾನತ್ತಿನ ಅವಧಿಯನ್ನು ಇತ್ಯರ್ಥ ಪಡಿಸುವ ಬಗ್ಗೆ.

**ಓದಲಾಗಿದೆ:**
1. ಆದೇಶ ಸಂಖ್ಯೆ ಸಿಆಸುಇ 24 ಎಸ್‌ಇಎನ್ 2002, ದಿ: 23-3-2002.
2. ಆದೇಶ ಸಂಖ್ಯೆ ಸಿಆಸುಇ 24 ಎಸ್‌ಇಎನ್ 2002, ದಿ: 20-11-2002.
3. ಆದೇಶ ಸಂಖ್ಯೆ ಸಿಆಸುಇ 24 ಎಸ್‌ಇಎನ್ 2002, ದಿ: 22-1-2004.
4. ನೋಟೀಸ್ ಸಂಖ್ಯೆ ಸಿಆಸುಇ 24 ಎಸ್‌ಇಎನ್ 2002, ದಿ: 13-2-2004.
5. ಶ್ರೀ ಕೆ.ಟಿ. ವಿಜಯರಾಜ್ ಅರಸ್, ನಿವೃತ್ತ ಅಧೀನ ಕಾರ್ಯದರ್ಶಿ, ಅವರ ಉತ್ತರ ದಿನಾಂಕ: 5-3-2004.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಕೆಲವೊಂದು ಅವಧಿಗೆ ಅನಧಿಕೃತವಾಗಿ ಕಛೇರಿಗೆ ಗೈರು ಹಾಜರಾದ ಆರೋಪಕ್ಕಾಗಿ ಶ್ರೀ ಕೆ.ಟಿ. ವಿಜಯರಾಜ್ ಅರಸ್, ನಿವೃತ್ತ ಅಧೀನ ಕಾರ್ಯದರ್ಶಿ, ಅವರ ವಿರುದ್ಧ ಇಲಾಖಾ ವಿಚಾರಣೆ ನಡೆದು ಮೇಲೆ (3)ರಲ್ಲಿ ಓದಲಾದ ದಿನಾಂಕ: 22-1-2004ರ ಸರ್ಕಾರಿ ಆದೇಶದಲ್ಲಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ 300-00 ರೂಪಾಯಿಗಳನ್ನು ಒಂದು ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆ ವಿಧಿಸಲಾಯಿತು. ಈ ವಿಚಾರಣೆಯ ಸಂಬಂಧ ಶ್ರೀ ಕೆ.ಟಿ. ವಿಜಯರಾಜ್ ಅರಸ್, ನಿವೃತ್ತ ಅಧೀನ ಕಾರ್ಯದರ್ಶಿ, ಅವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ: 23-3-2002ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಡಲಾಯಿತು. ಹಾಗೂ ಮೇಲೆ (2)ರಲ್ಲಿ ಓದಲಾದ ದಿನಾಂಕ 20-11-2002ರ ಸರ್ಕಾರಿ ಆದೇಶದಲ್ಲಿ ಮತ್ತೆ ಸೇವೆಗೆ ತೆಗೆದುಕೊಳ್ಳಲಾಯಿತು. ಸದರೀ ಅಮಾನತ್ತಿನ ಅವಧಿಯಲ್ಲಿ ಕರ್ತವ್ಯದ ಮೇಲೆ ಕಳೆಯದ ಅವಧಿ ಎಂದು ಏಕೆ ಪರಿಗಣಿಸಬಾರದೆಂಬುದಕ್ಕೆ ಸಮಜಾಯಿಸಿ ಕೇಳಿ ಅವರಿಗೆ ಮೇಲೆ (4)ರಲ್ಲಿ ಓದಲಾದ ದಿನಾಂಕ: 13-2-2004ರ ನೋಟೀಸ್ ನೀಡಲಾಯಿತು. ಈ ನೋಟೀಸ್‌ಗೆ ಶ್ರೀ ಕೆ.ಟಿ. ವಿಜಯರಾಜ್ ಅರಸ್ ಅವರು ಮೇಲೆ (5) ರಲ್ಲಿ ಓದಲಾದ ದಿನಾಂಕ: 5-3-2004ರ ಉತ್ತರ ಸಲ್ಲಿಸಿ, ಸಕ್ಕರೆ ಕಾಯಿಲೆ, ರಕ್ತದೊತ್ತಡ ರೋಗಗಳಿಂದ ನರಳುತ್ತಿದ್ದು ಇದರಿಂದಾಗಿ ಅನಿವಾರ್ಯವಾಗಿ ಕಛೇರಿಯ ಕೆಲಸಕ್ಕಾಗಿ ಗೈರು ಹಾಜರಾಗಬೇಕಾಯಿತು. ತಮ್ಮ ಲೆಕ್ಕದಲ್ಲಿ ಸಾಕಷ್ಟು ರಜೆಗಳು ಇದ್ದಾಗ್ಯೂ ಅದನ್ನು ಪರಿಗಣಿಸದೇ ರಜೆಯನ್ನು ಮಂಜೂರು ಮಾಡಿರುವುದಿಲ್ಲ. ನಿತ್ಯ ರೋಗಿಯಾಗಿ ಮಾನಸಿಕ ತೊಳಲಾಟದಿಂದ ನಿಸ್ಸಹಾಯಕನಾಗಿದ್ದು 08 ತಿಂಗಳ ಅವಧಿಯನ್ನು ಕರ್ತವ್ಯದ ಮೇಲೆ ಕಳೆಯದ ಅವಧಿಯೆಂದು ಪರಿಗಣಿಸಿದರೆ ದೊಡ್ಡ ಅಘಾತವೇ ಆಗುವುದರಿಂದ ಅದನ್ನು ಕರ್ತವ್ಯದ ಮೇಲಿನ ಅವಧಿ ಎಂದು ಪರಿಗಣಿಸಲು ಕೋರಿದ್ದಾರೆ. ಆದರೆ ವಿಚಾರಣೆಯು ದಾಖಲೆಗಳನ್ನಾಧರಿಸಿ ಕ್ರಮಬದ್ಧವಾಗಿ ನಡೆದಿದ್ದು ದಂಡನೆ ವಿಧಿಸಲಾಗಿದೆ. ಆದ್ದರಿಂದ ಶ್ರೀ ಕೆ.ಟಿ. ವಿಜಯರಾಜ್ ಅರಸ್, ನಿವೃತ್ತ ಅಧೀನ ಕಾರ್ಯದರ್ಶಿ, ಅವರ ಹೇಳಿಕೆಯಲ್ಲಿ ಯಾವುದೇ ಪರಿಶೀಲನಾರ್ಹ ಅಂಶಗಳು ಇಲ್ಲ ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 24 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 100(5)ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಟಿ. ವಿಜಯರಾಜ್ ಅರಸ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಅವರು ತಮ್ಮ ವಿರುದ್ಧ ನಡೆದ ಇಲಾಖಾ ವಿಚಾರಣೆ ಸಂಬಂಧ ದಿನಾಂಕ: 23-3-2002 ರಿಂದ 20-11-2002ರ ಸರ್ಕಾರಿ ಆದೇಶಗಳ ನಡುವೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದ ಮೇಲೆ ಕಳೆಯದ ಅವಧಿ ಎಂದು ಪರಿಗಣಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 389

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ರವೀಂದ್ರ ವಿದ್ಯಾ ಸಂಸ್ಥೆ, ಚಳ್ಳಕೆರೆ, ಚಿತ್ರದುರ್ಗ, ಈ ಸಂಸ್ಥೆಗೆ ನೇಮಿಸಲಾಗಿದ್ದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ:ಕಂಇ 36 ಮುನೋಸೊ 97, ದಿನಾಂಕ:27-2-1998.
2. ಸರ್ಕಾರಿ ಆದೇಶ ಸಂಖ್ಯೆ:ಕಂಇ 36 ಮುನೋಸೊ 97, ದಿನಾಂಕ:16-9-98, 20-4-1999, 18-2-2001, 16-5-2000, 4-8-2000, 5-10-2000, 24-4-2001, 15-10-2001, 3-4-2002, 28-9-2002, 8-5-2003 ಮತ್ತು 22-10-2003.
3. ಆಡಳಿತಾಧಿಕಾರಿ, ಶ್ರೀ ರವೀಂದ್ರ ವಿದ್ಯಾ ಸಂಸ್ಥೆ, ಚಳ್ಳಕೆರೆ, ಅವರ ಪತ್ರ ಸಂಖ್ಯೆ ರ.ವಿ.ಸಂ.48/98-99, ದಿನಾಂಕ:23-2-2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ:27-2-98ರ ಸರ್ಕಾರಿ ಆದೇಶದಲ್ಲಿ ಶ್ರೀ ರವೀಂದ್ರ ವಿದ್ಯಾ ಸಂಸ್ಥೆ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ ಇದಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27(ಎ)ರ ಪ್ರಕಾರ ಚಿತ್ರದುರ್ಗ ಉಪ ವಿಭಾಗದ ಉಪ ವಿಭಾಗಾಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ, ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು. ನಂತರ ಓದಲಾದ(2)ರಲ್ಲಿ ಆಡಳಿತಾಧಿಕಾರಿಯವರ ಕೋರಿಕೆಯಂತೆ ಕಾಲಕಾಲಕ್ಕೆ ಆಡಳಿತಾಧಿಕಾರಿಯವರ ಅವಧಿಯನ್ನು ಕಡೆಯದಾಗಿ ದಿನಾಂಕ:2-3-2004ರವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಶ್ರೀ ರವೀಂದ್ರ ವಿದ್ಯಾ ಸಂಸ್ಥೆ, ಚಳ್ಳಕೆರೆ, ಇದರ ಆಡಳಿತಾಧಿಕಾರಿಗಳು ಸರ್ಕಾರಕ್ಕೆ ಪತ್ರ ಬರೆದು ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸುವ ದೃಷ್ಟಿಯಿಂದ, ಸದರಿ ಸಂಸ್ಥೆಗೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಬೇಕೆಂದು ಕೋರಿದ್ದಾರೆ. ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 48 ಮುನೋಸೊ 2003, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2004**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ(5)ರ ಪ್ರಕಾರ ಶ್ರೀ ರವೀಂದ್ರ ವಿದ್ಯಾ ಸಂಸ್ಥೆ, ಚಳ್ಳಕೆರೆ, ಇದಕ್ಕೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ನೇಮಿಸಿರುವ ಆಡಳಿತಾಧಿಕಾರಿಯವರ ಅವಧಿಯನ್ನು ಸಾರ್ವಜನಿಕ ಹಿತ ದೃಷ್ಟಿಯಿಂದ ದಿನಾಂಕ:3-3-2004 ರಿಂದ 6 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ, ಇದರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 391

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ಶಿಕ್ಷಣ ಸಚಿವಾಲಯ**

**ಸುತ್ತೋಲೆ ಕ್ರಮಾಂಕ: ಇಡಿ 42 ಟಿಪಿಯು 2004, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2004**

**ವಿಷಯ:** ಪದವಿ ಪೂರ್ವ ಪರೀಕ್ಷೆಗೆ ಹಾಜರಾಗುವ ಅಂಗವಿಕಲ ವಿದ್ಯಾರ್ಥಿಗಳಿಗೆ ಸಹಾಯಕ ಬರಹಗಾರರ ವಿದ್ಯಾರ್ಹತೆ ಬಗ್ಗೆ.

**ಉಲ್ಲೇಖ:** ದಿನಾಂಕ: 29.1.2004 ಸಂಖ್ಯೆ:ಪಪೂಶಿ/ಆಶಾ(ಸನಿ)/ಪರೀಕ್ಷೆ/ಅಂವಿ/ಬರಹಗಾರ/04 ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರ ಪತ್ರ.

ಪದವಿ ಪೂರ್ವ ಶಿಕ್ಷಣ ಪರೀಕ್ಷೆಯಲ್ಲಿ ಪರೀಕ್ಷೆ ಬರೆಯುವ ಶಾಶ್ವತ ಅಂಗವಿಕಲ (ಎರಡೂ ಕೈಗಳ) ಹಾಗೂ ಸಂಪೂರ್ಣ ಅಚಿದ (ಎರಡು ಕಣ್ಣುಗಳು) ವಿದ್ಯಾರ್ಥಿಗಳು ತಮಗೆ ಇಚ್ಛೆಯುಳ್ಳ ವಿದ್ಯಾರ್ಹತೆಮಿತಿಗೆ ಒಳಪಡದಂತಹ ಬರಹಗಾರರನ್ನು ಈ ಕೆಳಗಿನ ಷರತ್ತುಗಳೊಂದಿಗೆ ಉಪಯೋಗಿಸಿಕೊಳ್ಳಲು ಅನುಮತಿ ನೀಡಲಾಗಿದೆ.

1. ಶಾಶ್ವತ ಅಂಗವಿಕಲರು ಮತ್ತು ಸಂಪೂರ್ಣ ದೃಷ್ಟಿದೋಷವುಳ್ಳ ವಿದ್ಯಾರ್ಥಿಗಳು ಬರಹಗಾರರ ಸಹಾಯಕ್ಕಾಗಿ ಮುಂಚಿತವಾಗಿ ತಾವು ಓದುತ್ತಿರುವ ಕಾಲೇಜಿನ ಪ್ರಾಂಶುಪಾಲರಿಗೆ ಅರ್ಜಿ ಸಲ್ಲಿಸಿ ಅನುಮತಿಯನ್ನು ಪಡೆದುಕೊಂಡಿರತಕ್ಕದ್ದು. ಮತ್ತು ಈ ಕೋರಿಕೆಯ ಜೊತೆಗೆ ಅಂಗವಿಕಲತೆಯ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.

2. ಬರಹಗಾರರ ಸಹಾಯವನ್ನು ಪಡೆದುಕೊಳ್ಳಲು ಇಚ್ಚಿಸುವ ವಿದ್ಯಾರ್ಥಿಗಳು ಪರೀಕ್ಷಾ ವೇಳೆಗಿಂತ ಒಂದು ಗಂಟೆ ಮುಂಚಿತವಾಗಿ ಬರಹಗಾರರ ವಿವರಗಳನ್ನು ಕಾಲೇಜಿನ ಪ್ರಾಂಶುಪಾಲರಿಗೆ ತಿಳಿಸಿ ಪೂರ್ವಾನುಮತಿ ಪಡೆಯುವುದು.
3. ಬರಹಗಾರರ ವಿದ್ಯಾರ್ಹತೆಯು ಶಾಶ್ವತ ಅಂಗವಿಕಲ ಮತ್ತು ಸಂಪೂರ್ಣ ದೃಷ್ಟಿದೋಷವುಳ್ಳ ವಿದ್ಯಾರ್ಥಿಗಳಿಗಿಂತ ಕಡಿಮೆ ವಿದ್ಯಾರ್ಹತೆ ಇರಬೇಕೆಂಬುದಾಗಿ ಏನೂ ಇಲ್ಲ. ಬರಹಗಾರರ ವಿದ್ಯಾರ್ಹತೆಯು ಹೆಚ್ಚಿಗೆ ಇದ್ದರೂ ನಡೆಯುತ್ತದೆ. ಆದರೆ ಅಂಗವಿಕಲ ಮತ್ತು ದೃಷ್ಟಿದೋಷವುಳ್ಳ ವಿದ್ಯಾರ್ಥಿಗಳು ತೆಗೆದುಕೊಳ್ಳುತ್ತಿರುವ ಪರೀಕ್ಷೆಯಲ್ಲಿನ ವಿಷಯಗಳು ಹಾಗೂ ಬರಹಗಾರರ ವಿಷಯಗಳು ಒಂದೇ ಆಗಿರಬಾರದು. ಉದಾಹರಣೆಗೆ ಒಬ್ಬ ಕಲೆ ಅಥವಾ ವಾಣಿಜ್ಯ ವಿದ್ಯಾರ್ಹತೆ ಹೊಂದಿರತಕ್ಕ ಬರಹಗಾರನು ವಿಜ್ಞಾನ (ಪಿಸಿಎಂಬಿ) ಪರೀಕ್ಷೆ ತೆಗೆದುಕೊಳ್ಳುತ್ತಿರುವ ಅಂಗವಿಕಲ ಮತ್ತು ದೃಷ್ಟಿದೋಷವುಳ್ಳ ವಿದ್ಯಾರ್ಥಿಗೆ ಬರಹಗಾರನಾಗಬಹುದು.
4. ಯಾವುದಾದರೂ ಒಂದು ಅಥವಾ ಹೆಚ್ಚಿನ ಅಂಗವಿಕಲತೆಯ ತೊಂದರೆಯಿಂದ ನರಳುತ್ತಿರುವ ಹಾಗೂ ದೃಷ್ಟಿ ಹಾಗೂ ಶ್ರವಣ ವೈಕಲ್ಯತೆ ಇರುವ ಅಭ್ಯರ್ಥಿಗಳಿಗೆ ಹೆಚ್ಚಿನ ಸಮಯಾವಕಾಶ ನೀಡುವುದು ಅಗತ್ಯವಾಗಿರುತ್ತದೆ. ಮೂರು ಗಂಟೆಯ ಅವಧಿಯ ಪ್ರಶ್ನೆ ಪತ್ರಿಕೆಗೆ ಗಂಟೆಗೆ 20 ನಿಮಿಷಗಳಂತೆ ಒಂದು ಗಂಟೆ ಹೆಚ್ಚಿನ ಸಮಯಾವಕಾಶ ನೀಡುವುದು. ಈ ಸೌಲಭ್ಯವನ್ನು ಬರಹಗಾರರ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುವ ವಿದ್ಯಾರ್ಥಿಗಳಿಗೂ ಕೂಡಾ ಒದಗಿಸುವುದು.
5. ಶ್ರವಣ ದೋಷವುಳ್ಳ ವಿದ್ಯಾರ್ಥಿಗಳಿಗೆ ಭಾಷಾ ಸಮಸ್ಯೆ ಇರುವುದರಿಂದ ಪರೀಕ್ಷೆ ಬರೆಯುವಲ್ಲಿ ವ್ಯಾಕರಣ, ವಾಕ್ಯ ರಚನಾ ದೋಷಗಳು ಆಗುವ ಸಾಧ್ಯತೆ ಇರುವುದನ್ನು ಪರಿಗಣಿಸಿ ಉತ್ತರ ಪತ್ರಿಕೆಯ ಮೌಲ್ಯಮಾಪಕರು ಅಂತಹ ವಿದ್ಯಾರ್ಥಿಗಳ ಉತ್ತರ ಪತ್ರಿಕೆಯನ್ನು ಗುರ್ತಿಸಿ, ತಾಳ್ಮೆಯಿಂದ ಮೌಲ್ಯಮಾಪನ ಮಾಡಲು ಅನುಕೂಲವಾಗುವಂತೆ ಶ್ರವಣ ದೋಷವುಳ್ಳ ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳಿಗೆ ಹಸಿರು ಬಣ್ಣದ ಸ್ಟಿಕರ್ ಅಂಟಿಸುವಲ್ಲಿ ಕ್ರಮ ತೆಗೆದುಕೊಳ್ಳುವುದು.

ಸಿದ್ಧಲಿಂಗಯ್ಯ

ಪಿ.ಆರ್. 392 ಸರ್ಕಾರದ ಅಧೀನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆಃ ಜಸಂಇ 78 ಡಬ್ಲ್ಯೂಬಿಎಂ 2003, ಬೆಂಗಳೂರು, ದಿನಾಂಕಃ 24ನೇ ಮಾರ್ಚ್ 2004**

**ವಿಷಯ:** ಬೃಹತ್/ಮಧ್ಯಮ ನೀರಾವರಿ ಜಲಾಶಯಗಳಲ್ಲಿರುವ ನೀರನ್ನು ಕುಡಿಯುವ ಉದ್ದೇಶಕ್ಕಾಗಿ ಬಳಸಲು ಸಮಿತಿ ರಚಿಸುವ ಬಗ್ಗೆ.

ಸರ್ಕಾರಿ ಆದೇಶದ ಸಂಖ್ಯೆಃಜಸಂಸ/78/ಡಬ್ಲ್ಯೂಬಿಎಂ/2003, ದಿನಾಂಕ:24/02/2004ರಲ್ಲಿ ಅನುಬಂಧದ ಕ್ರಮ ಸಂಖ್ಯೆ 14ರಲ್ಲಿ ಭದ್ರಾ ಜಲಾಶಯ ಯೋಜನೆ ಸಂಬಂಧಿಸಿದ ಸಮಿತಿಯನ್ನು, ಕ್ರಮ ಸಂಖ್ಯೆ 19ರಲ್ಲಿ ಕನಕನಾಲಾ ಯೋಜನೆಗೆ ಹಾಗೂ ಕ್ರಮ ಸಂಖ್ಯೆ 20ರ ಮಸ್ಕಿನಾಲಾ ಯೋಜನೆಗೆ ಸಂಬಂಧಿಸಿದ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೂ ಈ ಕೆಳಗೆ ಮಾರ್ಪಡಿಸಿದಂತೆ ರಚಿಸಿ ಆದೇಶಿಸಲಾಗಿದೆ.

**ಮಾರ್ಪಡಿಸಿದ ಕ್ರಮ ಸಂಖ್ಯೆ14 ಃ ಭದ್ರಾ ಜಲಾಶಯ ಯೋಜನೆ**

| ಕ್ರಮ ಸಂಖ್ಯೆ | ವಿವರ | ಷರಾ |
|---|---|---|
| 1 | ಜಿಲ್ಲಾಧಿಕಾರಿಗಳು, ಚಿಕ್ಕಮಂಗಳೂರು ಜಿಲ್ಲೆ, ಚಿಕ್ಕಮಂಗಳೂರು. | ಚೇರ್‌ಮನ್ |
| 2 | ಆಡಳಿತಾಧಿಕಾರಿಗಳು, ಭದ್ರಾ ಕಾಡಾ,ಮಲವಗೊಪ್ಪ ಶಿವಮೊಗ್ಗ. | ಸದಸ್ಯರು |
| 3 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ರಚನೆಯಾಗಬೇಕಾಗಿರುತ್ತದೆ) | ಸದಸ್ಯರು |
| 4 | 1. ಜಿಲ್ಲಾಧಿಕಾರಿಗಳು, ಶಿವಮೊಗ್ಗ.<br>2. ಜಿಲ್ಲಾಧಿಕಾರಿಗಳು, ದಾವಣಗೆರೆ.<br>3. ಜಿಲ್ಲಾಧಿಕಾರಿಗಳು, ಗದಗ.<br>4. ಜಿಲ್ಲಾಧಿಕಾರಿಗಳು, ಹಾವೇರಿ. | ಸದಸ್ಯರು<br>ಸದಸ್ಯರು<br>ಸದಸ್ಯರು<br>ಸದಸ್ಯರು |
| 5 | 1. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳೂ, ಚಿಕ್ಕಮಂಗಳೂರು<br>2. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳೂ, ಶಿವಮೊಗ್ಗ.<br>3. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳೂ, ದಾವಣಗೆರೆ. | ಸದಸ್ಯರು<br>ಸದಸ್ಯರು<br>ಸದಸ್ಯರು |
| 6 | ಸೂಪರಿಂಟೆಂಡಿಂಗ್ ಇಂಜಿನಿಯರ್, ಕನೀನಿನಿ, ತುಂಗಾ ಮೇಲ್ದಂಡೆ ಯೋಜನಾ ವೃತ್ತ ಶಿವಮೊಗ್ಗ. | ಸದಸ್ಯರು |
| 7 | ಸೂಪರಿಂಟೆಂಡಿಂಗ್ ಇಂಜಿನಿಯರ್, ಭದ್ರಾ ಯೋಜನಾ ವೃತ್ತ, ಬಿ.ಆರ್ ಪ್ರಾಜೆಕ್ಟ್. | ಸದಸ್ಯ ಕಾರ್ಯದರ್ಶಿ |

**ಮಾರ್ಪಡಿಸಿದ ಕ್ರಮ ಸಂಖ್ಯೆ 19 ಃ ಕನಕನಾಲಾ ಯೋಜನೆ**

| ಕ್ರಮ ಸಂಖ್ಯೆ | ವಿವರ | ಷರಾ |
|---|---|---|
| 1 | ಜಿಲ್ಲಾಧಿಕಾರಿಗಳು, ಕೊಪ್ಪಳ. | ಅಧ್ಯಕ್ಷರು |

| ಕ್ರಮ ಸಂಖ್ಯೆ | ವಿವರ | ಷರಾ |
|---|---|---|
| 2 | ಆಡಳಿತಾಧಿಕಾರಿಗಳು, ಟಿ.ಬಿ.ಪಿ ಮುನಿರಾಬಾದ್. | ಸದಸ್ಯರು |
| 3 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ರಚನೆಯಾಗಬೇಕಾಗಿದೆ) | ಸದಸ್ಯರು |
| 4 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ಕೊಪ್ಪಳ. | ಸದಸ್ಯರು |
| 5 | ಕಾರ್ಯಪಾಲಕ ಅಭಿಯಂತರರು, ಓ ಅಂಡ್ ಎಂ ವಿಭಾಗ, ಜಸ್ಕಾಂ, ಕೊಪ್ಪಳ. | ಸದಸ್ಯರು |
| 6 | ಅಧೀಕ್ಷಕ ಅಭಿಯಂತರರು, ತುಂಗಭದ್ರಾ ಕಾಲುವೆ ನಿರ್ಮಾಣ ವೃತ್ತ ಯರ್‌ಮರಸ್. | ಸದಸ್ಯ ಕಾರ್ಯದರ್ಶಿ |
| 7 | ಅಧೀಕ್ಷಕ ಅಭಿಯಂತರರು, ತುಂಗಭದ್ರಾ ಯೋಜನಾ ವೃತ್ತ, ಮುನಿರಾಬಾದ್. | ಸದಸ್ಯರು |

**ಮಾರ್ಪಡಿಸಿದ ಕ್ರಮ ಸಂಖ್ಯೆ 20 : ಮಸ್ಕಿನಾಲಾ ಯೋಜನೆ**

| ಕ್ರಮ ಸಂಖ್ಯೆ | ವಿವರ | ಷರಾ |
|---|---|---|
| 1 | ಜಿಲ್ಲಾಧಿಕಾರಿಗಳು, ರಾಯಚೂರು. | ಅಧ್ಯಕ್ಷರು |
| 2 | ಆಡಳಿತಾಧಿಕಾರಿಗಳು, ಟಿ.ಬಿ.ಪಿ ಮುನಿರಾಬಾದ್. | ಸದಸ್ಯರು |
| 3 | ಅಧ್ಯಕ್ಷರು, ನೀರು ಬಳಕೆದಾರರ ಸಹಕಾರ ಸಂಘಗಳ ಒಕ್ಕೂಟ (ರಚನೆಯಾಗಬೇಕಾಗಿದೆ) | ಸದಸ್ಯರು |
| 4 | ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು, ರಾಯಚೂರು. | ಸದಸ್ಯರು |
| 5 | ಕಾರ್ಯಪಾಲಕ ಅಭಿಯಂತರರು, ಓ ಅಂಡ್ ಎಂ ವಿಭಾಗ, ಜಸ್ಕಾಂ, ರಾಯಚೂರು. | ಸದಸ್ಯರು |
| 6 | ಅಧೀಕ್ಷಕ ಅಭಿಯಂತರರು, ತುಂಗಭದ್ರಾ ಕಾಲುವೆ ನಿರ್ಮಾಣ ವೃತ್ತ, ಯರ್‌ಮರಸ್. | ಸದಸ್ಯ ಕಾರ್ಯದರ್ಶಿ |
| 7 | ಅಧೀಕ್ಷಕ ಅಭಿಯಂತರರು, ತುಂಗಭದ್ರಾ ಯೋಜನಾ ವೃತ್ತ, ಮುನಿರಾಬಾದ್. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 393 **ಐ.ಡಿ. ಧಮನ್**

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ) ಜಲ ಸಂಪನ್ಮೂಲ ಇಲಾಖೆ (ಕೃಭಾಜನಿನಿ ವಿ.ಕೋಶ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರ ಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕ (ಸ್ವತಂತ್ರ ಪ್ರಭಾರ) ಡಾ:ಎಂ. ರಾಮಚಂದ್ರರವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆ:**
1. ತಾ: 08.01.2001 ಸಂಖ್ಯೆ: ಆಕುಕ 251 ಎಂಎಂಸಿ 2001ರ ಅಧಿಸೂಚನೆ
2. ತಾ: 04.07.2002 ಸಂಖ್ಯೆ: ಆಕುಕ 251 ಎಂಎಂಸಿ 2001ರ ಕಾರಣ ಕೇಳುವ ನೋಟೀಸ್
3. ತಾ: 15.11.2002ರ ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರು (ಸ್ವ.ಪ್ರ.) ಡಾ: ಎಂ. ರಾಮಚಂದ್ರರವರ ಲಿಖಿತ ರಕ್ಷಣಾ ಹೇಳಿಕೆ.
4. ತಾ: 09.01.2003 ಸಂಖ್ಯೆ: ಆಕುಕ 251 ಎಂಎಂಸಿ 2001ರ ಸರ್ಕಾರಿ ಆದೇಶ
5. ತಾ: 20.06.2003ರ ನಿವೃತ್ತ ಜಿಲ್ಲಾ ನ್ಯಾಯಾಧೀಶ ಮತ್ತು ವಿಚಾರಣಾ ಪ್ರಾಧಿಕಾರ ಶ್ರೀ ಎನ್.ಎಸ್. ಸಂಗೊಳ್ಳಿರವರ ಪತ್ರ.
6. ತಾ: 07.11.2003 ಸಂಖ್ಯೆ: ಆಕುಕ 251 ಎಂಎಂಸಿ 2001 ಅಧಿಸೂಚನೆ
7. ತಾ: 10.02.2004 ಸಂಖ್ಯೆ: ಜೀ೩ 3:ಎಂ-6:ಆರ್-5:943ರ ಮಹಾಲೇಖಪಾಲರ (ಎ ಅಂಡ್ ಇ) ಪತ್ರ
8. ತಾ: 20.02.2004 ಸಂಖ್ಯೆ: ಆಕುಕ 72 ಎಂಎಂಸಿ 2004ರ 2ನೇ ಕಾರಣ ಕೇಳುವ ನೋಟೀಸ್
9. ತಾ: 28.02.2004ರ ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕ (ಸ್ವತಂತ್ರ ಪ್ರಭಾರ) ಡಾ: ಎಂ. ರಾಮಚಂದ್ರ ರವರ ಅರ್ಜಿ

**ಪೀಠಿಕೆ:**

1. ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರ ಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕ (ಸ್ವತಂತ್ರ ಪ್ರಭಾರ) ಡಾ: ಎಂ. ರಾಮಚಂದ್ರರವರು ಕರ್ತವ್ಯದಿಂದ ತಾ: 01.06.2001 ರಿಂದ ತಾ: 11.11.2003ರವರೆಗೆ ಅನಧಿಕೃತ ಗೈರುಹಾಜರಾಗಿ ತೀವ್ರ ಸ್ವರೂಪದ ದುರ್ನಡತೆಯನ್ನು ಎಸಗಿದ್ದರು. ಇದು ಅವರ ವಿರುದ್ಧ ಶಿಸ್ತಿನ ಕ್ರಮಕೈಗೊಳ್ಳಲು ಆಕರ್ಷಣೀಯವಾಗಿತ್ತು. ಆದ್ದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11ನೇ ನಿಯಮದಡಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸನ್ನಾಹದಲ್ಲಿ ದಿನಾಂಕ 04.07.2002ರ ಕಾರಣ ಕೇಳುವ ನೋಟೀಸ್‌ನ್ನು ಅವರ ವಿರುದ್ಧ ನಿರ್ದಿಷ್ಟವಾದ ದೋಷಾರೋಪಣೆಗಳ ಪಟ್ಟಿ ಪ್ರತಿಯೊಂದು ದುರ್ನಡತೆ ಅಥವಾ ದುರ್ವ್ಯವಹಾರಗಳ ವಿವರಣಾತ್ಮಕ ಹೇಳಿಕೆಯನ್ನು ಪ್ರತಿಯೊಂದು ದೋಷಾರೋಪಣೆಯನ್ನು ಸಮರ್ಥಿಸುವ ದಾಸ್ತಾವೇಜುಗಳ ಹಾಗೂ ಸಾಕ್ಷಿಗಳ ಪಟ್ಟಿಯನ್ನು ಅನುಬಂಧಿಸಿ ಅವರ ಲಿಖಿತ ರಕ್ಷಣಾ ಹೇಳಿಕೆಯನ್ನು 15 ದಿನಗಳ ಅವಧಿಯಲ್ಲಿ 11(4)ನೇ ನಿಯಮದಡಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಅವರು ಸಲ್ಲಿಸಿದ್ದ ದಿನಾಂಕ 15.11.2002ರ ಲಿಖಿತ ರಕ್ಷಣಾ ಹೇಳಿಕೆಯಲ್ಲಿ ಅವರ ತಾಯಿಯವರು ಅನಾರೋಗ್ಯದಿಂದ ಬಳಲುತ್ತಿದ್ದು ಅವರ ಯೋಗಕ್ಷೇಮ ನೋಡಿಕೊಳ್ಳ ಬೇಕಾಗಿರುವುದರಿಂದ ಕರ್ತವ್ಯದ ಮೇಲೆ ಹಾಜರಾಗಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸುತ್ತಾ ದಿ: 01.06.2001 ರಿಂದ 28.02.2002ರವರೆಗೆ ಕಾಲಕಾಲಕ್ಕೆ ನೀಡಿರುವ ರಜೆ ಅರ್ಜಿಗಳನ್ನು ಪರಿಗಣಿಸಿ ಅವರ ಗೈರುಹಾಜರಿಯನ್ನು ಸಕ್ರಮಗೊಳಿಸಿ

ದಿ: 28.02.2002ರಿಂದ ಅಥವಾ ದಿ:01.06.2001ರಿಂದ ಜಾರಿಗೆ ಬರುವಂತೆ ಸ್ವ-ಇಚ್ಛಾ ನಿವೃತ್ತರಾಗಲು ಅನುಮತಿ ನೀಡುವಂತೆ ಕೋರಿದ್ದರು. ಅವರು ಸಲ್ಲಿಸಿರುವ ರಕ್ಷಣಾ ಹೇಳಿಕೆ ಸಮಂಜಸವಾಗಿರಲಿಲ್ಲ. ಆದ್ದರಿಂದ ಅವರ ವಿರುದ್ಧ ರೂಪಿಸಲಾಗಿರುವ ದೋಷಾರೋಪಣೆಗಳ ಮೇಲೆ ಇಲಾಖಾ ವಿಚಾರಣೆ ನಡೆಸುವುದು ಅಗತ್ಯವಾಗಿತ್ತು.

2. ಅದರಂತೆ ತಾ: 09.01.2003ರ ಸರ್ಕಾರಿ ಆದೇಶದಲ್ಲಿ 1957ರ ಕೆಸಿಎಸ್ (ಸಿಸಿಎ) ನಿಯಮಾವಳಿಯ 11(2) ಮತ್ತು 11(5)(ಸಿ) ನಿಯಮದಡಿ ನಿವೃತ್ತ ಜಿಲ್ಲಾ ನ್ಯಾಯಾಧೀಶ ಶ್ರೀ ಎನ್.ಎಸ್. ಸಂಗೊಳ್ಳಿರವರನ್ನು ವಿಚಾರಣಾ ಪ್ರಾಧಿಕಾರವಾಗಿ ಹಾಗೂ ವೈದ್ಯಕೀಯ ಶಿಕ್ಷಣ ಉಪನಿರ್ದೇಶಕ 1ರವರನ್ನು ಮಂಡನಾಧಿಕಾರಿಯಾಗಿ ನೇಮಿಸಿ ಇಲಾಖಾ ವಿಚಾರಣೆಯನ್ನು ನಡೆಸಿ ನಿರ್ದಿಷ್ಟ ಫೈಂಡಿಂಗ್ಸ್‌ನೊಂದಿಗೆ ವಿಚಾರಣಾ ವರದಿಯನ್ನು 3 ತಿಂಗಳ ಅವಧಿಯಲ್ಲಿ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು.

3. ವಿಚಾರಣಾ ಪ್ರಾಧಿಕಾರಿಯು ತಾ: 20.06.2003ರಂದು ವಿಚಾರಣಾ ವರದಿಯನ್ನು ನಿರ್ದಿಷ್ಟ ಫೈಂಡಿಂಗ್ಸ್‌ನೊಂದಿಗೆ ಸಲ್ಲಿಸಿ ಆಪಾದಿತರ ವಿರುದ್ಧ ಮಾಡಲಾಗಿದ್ದ ಆರೋಪಣೆಗಳು ಸಾಬೀತಾಗಿದೆ ಎಂದು ಸ್ಪಷ್ಟಪಡಿಸಿದ್ದಾರೆ.

4. ಈ ಮಧ್ಯೆ ಅನಧಿಕೃತ ಗೈರುಹಾಜರಿಯಲ್ಲಿದ್ದ ಡಾ: ಎಂ. ರಾಮಚಂದ್ರರವರು ಅರ್ಜಿ ಸಲ್ಲಿಸಿ ತಾ:01.06.2001ರಿಂದ ಅವರ ತಾಯಿಯವರ ಅನಾರೋಗ್ಯದ ಕಾರಣಗಳಿಂದ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ಈಗ ಪರಿಸ್ಥಿತಿ ಸುಧಾರಿಸಿರುವುದರಿಂದ ಗೈರುಹಾಜರಿಯನ್ನು ಮಾನವೀಯ ದೃಷ್ಟಿಯಿಂದ ಪರಿಗಣಿಸಿ ಅದನ್ನು ಸಂಬಳರಹಿತ ರಜೆ ಎಂದು ಪರಿವರ್ತಿಸಿ ಮರುನೇಮಕಮಾಡುವಂತೆ ಕೋರಿದ್ದರು. ವೈದ್ಯಕೀಯ ಶಿಕ್ಷಣ ನಿರ್ದೇಶಕರ ಶಿಫಾರಸ್ಸಿನ ಮೇರೆಗೆ ಆಪಾದಿತರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇಟ್ಟು ಅವರನ್ನು ತಾ:08.01.2002 ಸಂಖ್ಯೆ: ಆಕುಕ 251 ಎಂಎಂಸಿ 2001ರ ಅಧಿಸೂಚನೆಯಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜಿನ ಶಸ್ತ್ರಚಿಕಿತ್ಸಾ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರಾಗಿ (ಸ್ವತಂತ್ರ ಪ್ರಭಾರ) ನೇಮಿಸಲಾಗಿತ್ತು. ಆದರೆ ಅವರು ಸದರಿ ಹುದ್ದೆಯ ಕಾರ್ಯಭಾರ ವಹಿಸಿಕೊಂಡಿರಲಿಲ್ಲ. ಅನಂತರ ಮತ್ತೆ ದಿ:07.11.2003ರ ಅಧಿಸೂಚನೆಯಲ್ಲಿ ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಸ್ವತಂತ್ರ ಪ್ರಭಾರದ ಮೇಲೆ ಶಸ್ತ್ರ ಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕರಾಗಿ ನೇಮಿಸಲಾಗಿತ್ತು. ಅದರಂತೆ ಅವರು ತಾ: 12.11.2003ರ ಪೂರ್ವಾಹ್ನ ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಕಾರ್ಯಭಾರ ವಹಿಸಿಕೊಂಡಿದ್ದಾರೆ.

5. ವಿಚಾರಣಾ ವರದಿಯಲ್ಲಿನ ಫೈಂಡಿಂಗ್ಸ್‌ನ್ನು ಸರ್ಕಾರವು ಕೂಲಂಕಷವಾಗಿ ವಿಶ್ಲೇಷಿಸಿ ಅದನ್ನು ಏಕೆ ಅಂಗೀಕರಿಸಬಾರದು ಎಂಬುದಕ್ಕೆ ಕಾರಣ ಸೂಚಿಸುವಂತೆ ಆಪಾದಿತರಿಗೆ ತಾ: 20.02.2004ರ ಎರಡನೇ ಕಾರಣ ಕೇಳುವ ನೋಟೀಸ್‌ನ್ನು ನೀಡಲಾಗಿತ್ತು. ಅದಕ್ಕೆ ಅವರು ನೀಡಿರುವ ಉತ್ತರದ ಸಾರಾಂಶ ಈ ಮುಂದಿನಂತಿದೆ.

6. ಅವರ ತಾಯಿಯವರಿಗೆ ತಜ್ಞ ವೈದ್ಯರಿಂದ ಕ್ಯಾನ್ಸರ್ ರೋಗಕ್ಕೆ ಚಿಕಿತ್ಸೆ ನೀಡಿಸುವ ಹಾಗೂ ಅವರ ಶುಶ್ರೂಷೆಯನ್ನು ಪೂರ್ಣಪ್ರಮಾಣದಲ್ಲಿ ನೋಡಿಕೊಳ್ಳುವ ಉದ್ದೇಶದಿಂದ ದಿನಾಂಕ: 03.03.2001 ರಿಂದ 28.02.2002ರವರೆಗೆ ಕಾಲಕಾಲಕ್ಕೆ ರಜೆ ಅರ್ಜಿಯನ್ನು ಸಲ್ಲಿಸಿ, ರಜೆ ಮಂಜೂರು ಮಾಡುವಂತೆ ಕೋರಿರುವುದು ಸರ್ಕಾರದ ಆದೇಶ ಸಂಖ್ಯೆ: ಆಕುಕ 251 ಎಂಎಂಸಿ 2001 ದಿ: 09.01.2003ರ ಪೀಠಿಕೆಯಲ್ಲಿ ನಮೂದಿಸಲಾಗಿದೆ. ಆದುದರಿಂದ ದಿ:18.01.2002ರಿಂದ ಕರ್ತವ್ಯಕ್ಕೆ ಗೈರುಹಾಜರಾಗಿರುವುದು ಅನಧಿಕೃತವಾಗದ್ದು ಆಗುತ್ತದೆ ಎಂದು ವಿಚಾರಣಾಧಿಕಾರಿಯವರು ನಿರ್ಣಯಿಸಿರುವುದು ಸತ್ಯಕ್ಕೆ ದೂರವಾಗಿದೆ. ಅವರ ತಾಯಿಯವರಿಗೆ ಸೂಕ್ತ ತಜ್ಞ ವೈದ್ಯರಿಂದ ಚಿಕಿತ್ಸೆ ನೀಡಲು ಮತ್ತು ಅವರ ಶುಶ್ರೂಷೆಗಾಗಿ ಕಾಲವನ್ನು ವ್ಯಯಗೊಳಿಸಲು ಕರ್ತವ್ಯದ ಜೊತೆಗೆ ಸಾಧ್ಯವಾಗದೇ ಇದ್ದುದರಿಂದ, ಕರ್ತವ್ಯಕ್ಕೆ ಚ್ಯುತಿಯಾಗದಂತೆ ದಿ: 08.11.2001 ಮತ್ತು 29.11.2001ರಂದು ಸಮುಚಿತ ಮಾರ್ಗದಲ್ಲಿ ಅರ್ಜಿಯನ್ನು ಸಲ್ಲಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 285(1)ನೇ ನಿಯಮದಡಿ ದಿ:28.02.2002ರಿಂದ ಸ್ವ-ಇಚ್ಛಾ ನಿವೃತ್ತರಾಗಲು ಅನುಮತಿ ಕೋರಿದ್ದರು. ಆ ಸಮಯದಲ್ಲಿ ಯಾವುದೇ ಇಲಾಖಾ ವಿಚಾರಣೆಯು ಬಾಕಿ ಇರಲ್ಲ ; ಮತ್ತು 3 ತಿಂಗಳ ಸೂಚನಾವಧಿಯಲ್ಲಿಯೂ ಸಹ ಅವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರಲಿಲ್ಲ ಮತ್ತು ನ್ಯಾಯಾಲಯದಲ್ಲಿ ಕಟ್ಲೆ ಬಾಕಿ ಇರಲಿಲ್ಲ. ಅವರು ಸಲ್ಲಿಸಿದ್ದ ಸ್ವ-ಇಚ್ಛಾ ನಿವೃತ್ತಿ ಅರ್ಜಿ ಮೇಲೆ ಯಾವುದೇ ತೀರ್ಮಾನ ತೆಗೆದುಕೊಂಡಿರಲಿಲ್ಲ. ಆದ್ದರಿಂದ ನೋಟೀಸ್ ನೀಡಿರುವುದು ನಿಯಮಕ್ಕೆ ಪೂರಕವಾಗಿಲ್ಲ. ತಾ:07.11.2003ರ ಅಧಿಸೂಚನೆಯಲ್ಲಿ ಅವರನ್ನು ಪುನರ್ ನೇಮಿಸಿದ್ದ ಕಾರಣ ಮತ್ತು ಅವರ ತಾಯಿಯವರ ದೇಹಸ್ಥಿತಿಯು ಉತ್ತಮಗೊಂಡಿದ್ದರಿಂದ ದಿ: 12.11.2003ರಿಂದ ಕರ್ತವ್ಯಕ್ಕೆ ಹಾಜರಾಗಿದ್ದರು.

7. ಮೇಲ್ಕಂಡ ಹಿನ್ನೆಲೆಯಲ್ಲಿ ದಿ: 01.06.2001 ರಿಂದ 11.11.2003ರ ಅವಧಿಗೆ ಅವರ ಹಕ್ಕಿನಲ್ಲಿರುವ ರಜೆಯನ್ನು ಮಂಜೂರು ಮಾಡಿ ಸದರಿ ಅವಧಿಯನ್ನು ಸಕ್ರಮಗೊಳಿಸಿ, ಆರೋಪದಿಂದ ವಿಮುಕ್ತಿಗೊಳಿಸಲು ಕೋರಿದ್ದಾರೆ. ಸ್ವ-ಇಚ್ಛಾ ನಿವೃತ್ತಿ ಅರ್ಜಿಯನ್ನು ಚಾಲ್ತಿಯಲಿಲ್ಲವೆಂದು ಪರಿಗಣಿಸಲು ಕೋರಲಾಗಿದೆ.

8. ಅವರ ವಿವರಣೆಯು ಸಮರ್ಥನೀಯವಾಗಿಲ್ಲ. ಅವರ ತಾಯಿ ಮತ್ತು ಅವರ ವೈಯಕ್ತಿಕ ಅನಾರೋಗ್ಯದ ಅವಧಿಯಲ್ಲಿ ಅವರು ರಜೆ ಅರ್ಜಿ ಸಲ್ಲಿಸಿ ರಜೆ ಮಂಜೂರಾತಿ ಪಡೆಯಲಾಗದಂತಹ ಯಾವುದೇ ಸನ್ನಿವೇಶ ಇರಲಿಲ್ಲ. ಆದಾಗ್ಯೂ ಅವರು ಕರ್ತವ್ಯದಿಂದ ಅನಧಿಕೃತವಾಗಿ ಗೈರುಹಾಜರಾಗಿದ್ದುದು ಸುಸ್ಪಷ್ಟವಾಗಿ ಬಿಂಬಿಸುತ್ತದೆ. ಇದರಿಂದ ವೈದ್ಯಕೀಯ ಕಾಲೇಜಿನ ಪಾಠಪ್ರವಚನಗಳಿಗೆ ಮತ್ತು ರೋಗಿಗಳ ಶುಶ್ರೂಷೆಗೆ ಅಡಚಣೆ ಉಂಟಾಗಿತ್ತು.

9. ಪ್ರಸ್ತುತ ಪ್ರಕರಣದ ವಿಚಾರಣಾ ವರದಿಯನ್ನು ಕೂಲಂಕಷವಾಗಿ ವಿಶ್ಲೇಷಿಸಲಾಗಿದೆ. ಅವರ ತಾಯಿಯವರು ಕ್ಯಾನ್ಸರ್‌ರೋಗದಿಂದ ಬಳಲುತ್ತಿದ್ದು ಕ್ಯಾನ್ಸರ್‌ರೋಗಕ್ಕೆ ಚಿಕಿತ್ಸೆ ಕೊಡಿಸಲು ಮತ್ತು ಸ್ವತಃ ಶುಶ್ರೂಷೆ ಮಾಡಬೇಕಾಗಿದ್ದರೂ ಸಹ ಅವರು ಕಾಲಕಾಲಕ್ಕೆ ಅವರ ಗೈರುಹಾಜರಿಗೆ ರಜೆ ಮಂಜೂರು ಮಾಡಿಸಿಕೊಳ್ಳಲು ಅಗತ್ಯವಾದ ವೈದ್ಯಕೀಯ ಪ್ರಮಾಣಪತ್ರ ಹಾಗೂ ಇತರೆ ದಾಖಲೆಗಳನ್ನು ಸಲ್ಲಿಸಲು ಯಾವುದೇ ಅಡಚಣೆ ಇರಲಿಲ್ಲ ಎಂಬುದು ಸುಸ್ಪಷ್ಟವಾಗಿ ವೇದ್ಯವಾಗುತ್ತದೆ. ದಿ: 01.06.2001ರಿಂದ 11.11.2003ರವರೆಗೆ ಕರ್ತವ್ಯಕ್ಕೆ ನಿರಂತರವಾಗಿ ಗೈರುಹಾಜರಾಗಿದ್ದರು ಎಂಬುದು ದಾಖಲೆಗಳಿಂದ ಸ್ಪಷ್ಟವಾಗಿ ಬಿಂಬಿತವಾಗಿರುತ್ತದೆ. ರಜೆ ಮಂಜೂರಾತಿ ಪಡೆಯದೆ ಕರ್ತವ್ಯದಿಂದ ಗೈರುಹಾಜರಾಗಿರುವುದು. ಒಂದು ತೀವ್ರಸ್ವರೂಪದ ದುರ್ನಡತೆಯಾಗುತ್ತದೆ. ಅದಕ್ಕೆ ಶಿಸ್ತಿನ ಕ್ರಮ ಕೈಗೊಳ್ಳಬೇಕು. ರಜೆ ಮಂಜೂರಾತಿಯನ್ನು ಪಡೆಯದೆ ಕರ್ತವ್ಯಕ್ಕೆ ಗೈರುಹಾಜರಾದಲ್ಲಿ ಅದು ಅನಧಿಕೃತ ಗೈರುಹಾಜರಾಗಿದೆಯೇ ಹೊರತು ಅಧಿಕೃತ ಎಂದು ಪರಿಗಣಿಸುವಂತಿಲ್ಲ. ರಜೆ ಅರ್ಜಿಯನ್ನು ನೀಡಿದಾಕ್ಷಣ ರಜೆ ಮಂಜೂರು ಮಾಡಿಸಿದಂತಾಗುವುದಿಲ್ಲ. ಅದನ್ನು ಮಂಜೂರು ಮಾಡಿಸಿಕೊಂಡ ನಂತರವೇ ರಜೆಯನ್ನು ಉಪಯೋಗಿಸಿಕೊಳ್ಳಬೇಕು. ಪ್ರತಿಯೊಬ್ಬ ಸರ್ಕಾರಿ ನೌಕರರು ಕರ್ತವ್ಯನಿರತರಾಗಬೇಕು ಅಥವಾ ರಜೆ ಮಂಜೂರಾತಿಯನ್ನು ಪಡೆದು ರಜೆಯನ್ನು ಬಳಸಿಕೊಳ್ಳಬಹುದು. ಗೈರುಹಾಜರಾಗಿರುವುದು ಅನಧಿಕೃತವಾಗಿದೆ. ಅವರ ವರ್ತನೆಯನ್ನು ವಿಶ್ಲೇಷಿಸಿದಲ್ಲಿ 1966ರ ಕೆಸಿಎಸ್ (ನಡತೆ) ನಿಯಮಾವಳಿಯ 3ನೇ ನಿಯಮದಲ್ಲಿ ಪ್ರತಿಯೊಬ್ಬ ಸರ್ಕಾರಿ ನೌಕರರು ಹೊಂದಿರಬೇಕಾದ

ಅತ್ಯಂತ ಶ್ರದ್ಧೆ, ಭಕ್ತಿ, ಆಸಕ್ತಿ ನೀತಿ ಮತ್ತು ನಿಷ್ಠೆಯನ್ನು ಹೊಂದಿರಲಿಲ್ಲವೆಂಬುದು ವೇದ್ಯವಾಗುತ್ತದೆ. ಕೆಸಿಎಸ್ಆರ್‌ನ 107ನೇ ನಿಯಮದಡಿ ರಜೆಯನ್ನು ಹಕ್ಕು ಎಂದು ಪರಿಗಣಿಸತಕ್ಕದ್ದಲ್ಲ. ಅದನ್ನು ಮಂಜೂರು ಮಾಡುವ ಅಥವಾ ತಿರಸ್ಕರಿಸಲು ಸಕ್ಷಮ ಪ್ರಾಧಿಕಾರಕ್ಕೆ ಅಧಿಕಾರವಿದೆ. ರಜೆ ಮಂಜೂರು ಆಗದೆ ಕರ್ತವ್ಯದಿಂದ ಗೈರುಹಾಜರಾದಲ್ಲಿ ಅದನ್ನು ಸದರಿ ನಿಯಮಾವಳಿಯ 106-ಎ ನಿಯಮದಡಿ ಎಲ್‌ಡಬ್ಲ್ಯೂಎ ಎಂದು ಪರಿಗಣಿಸಿ ಶಿಸ್ತಿನ ಕ್ರಮ ಕೈಗೊಳ್ಳಲು ಮತ್ತು 108ನೇ ನಿಯಮದೊಂದಿಗೆ ಓದಲಾದ ತಾ: 14.09.2001 ಸಂಖ್ಯೆ:ಸಿಆಸುಇ 18 ಸೇವಿಇ 2001ರ ಸುತ್ತೋಲೆ ಪ್ರಕಾರ ಅಂತಹ ಗೈರುಹಾಜರಾದ ಅವಧಿಯು 4 ತಿಂಗಳು ಮೀರಿದ್ದಲ್ಲಿ ಸೇವೆಯಿಂದ ವಜಾ ಮಾಡುವ ಅಥವಾ ತೆಗೆದುಹಾಕುವ ದಂಡನೆಯನ್ನು 1957ರ ಕೆಸಿಎಸ್ (ಸಿಸಿಎ) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಪ್ರಕ್ರಿಯೆಯನ್ನು ಪಾಲಿಸಿದ ನಂತರ ವಿಧಿಸಬಹುದಾಗಿರುತ್ತದೆ. ಆದಾಗ್ಯೂ ಪ್ರಸ್ತುತ ಪ್ರಕರಣದ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಲಘುವಾಗಿ ಪರಿಗಣಿಸಲು ಸರ್ಕಾರ ನಿರ್ಧರಿಸಿದೆ.

10. ಮೇಲ್ಕಂಡ ಸನ್ನಿವೇಶದಲ್ಲಿ ಡಾ: ಎಂ. ರಾಮಚಂದ್ರರವರ ಅನಧಿಕೃತ ಗೈರುಹಾಜರಿಯನ್ನು "ಡೈಸ್‌ನಾನ್" ಎಂದು ಪರಿಗಣಿಸಿ ಅವರ ಮುಂದಿನ ಒಂದು ವಾರ್ಷಿಕ ವೇತನ ಮುಂಬಡ್ತಿಯನ್ನು (Increment) ಸಂಚಿತ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆ ವಿಧಿಸುವುದು ಸೂಕ್ತವೆಂದು ಸರ್ಕಾರ ನಿರ್ಧರಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 72 ಎಂಎಂಸಿ 2004, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2004**

11. ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರ ಚಿಕಿತ್ಸಾಶಾಸ್ತ್ರ ಸಹಾಯಕ ಪ್ರಾಧ್ಯಾಪಕ (ಸ್ವತಂತ್ರ ಪ್ರಭಾರ) ಡಾ:ಎಂ. ರಾಮಚಂದ್ರರವರ ತಾ:01.06.2001 ರಿಂದ 11.11.2003ರವರೆಗಿನ ಅವರ ಸಂಪೂರ್ಣ ಗೈರುಹಾಜರಿ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 8(14-ಎ)ನೇ ನಿಯಮದಡಿ 'ಡೈಸ್‌ನಾನ್' ಎಂದು ಪರಿಗಣಿಸಲಾಗಿದೆ.

12. ಮೇಲ್ಕಂಡ ಸಾಬೀತಾದ ದುರ್ನಡತೆಗಾಗಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 8(iii) ನೇ ನಿಯಮದಡಿ ಅವರ ಮುಂದಿನ ವಾರ್ಷಿಕವೇತನ ಮುಂಬಡ್ತಿಯನ್ನು (increment) ಸಂಚಿತ ಪರಿಣಾಮ ಇಲ್ಲದಂತೆ ತಡೆಹಿಡಿಯುವ ಲಘುದಂಡನೆಯನ್ನು ವಿಧಿಸಲಾಗಿದೆ. (He is imposed a minor penalty of with holding his next increment without cumulative effect)

13. ಮಹಾಲೇಖಪಾಲರು ಮೇಲ್ಕಂಡ ವಾರ್ಷಿಕ ವೇತನ ಮುಂಬಡ್ತಿ ತಡೆಹಿಡಿಯುವ ದಂಡನೆಯನ್ನು ಜಾರಿಗೊಳಿಸಿ ಅದರ ಅನುಪಾಲನಾ ವರದಿಯನ್ನು ಸರ್ಕಾರಕ್ಕೆ ಅತ್ಯಂತ ತ್ವರಿತವಾಗಿ ಸಲ್ಲಿಸುವರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 394

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**INFRASTRUCTURE DEVELOPMENT SECRETARIAT**

**Sub:** Release of funds for cost-sharing Railway projects in the State Of Karnataka - 2003-04

**Read:**
1. GO No. IDD 1 NSW 2002 dated 22.03.02
2. GO No. IDD 1 NSW 2002 dated 19.02.03
3. GO No. IDD 47 NSW 2003 dated. 12.09.03
4. GO No. IDD 4 NSW 2003 dated 22.1.04
5. Letter No. W.63/B/CN/BNG/Genl. dated 15.03.04 from CAO (Con.), SWR, Bangalore.

**Preamble**:

1. In the G. O. read at (1) above, the Government of Karnataka (GoK) had accorded administrative approval for bearing two-thirds of the estimated total cost of Rs. 187 crores of the Kottur-Harihar (New Line), Bangalore-Kengeri (Doubling) and Kengeri-Ramanagaram (Doubling) Projects, which are critical railway links in the State.
2. In the G. O. read at (2) to and (4) above, GoK has released in all Rs. 5 Crores towards its share of the investment in these projects.
3. In the letter read at (5) above, the CAO (Con.) has reported that as of 14th March 2004, the cumulative expenditure on these three projects is Rs. 17.58 crores which works out to a GoK share of Rs. 13.39 crores. Accordingly, he has sought release of the balance share of Rs. 8.39 crores.
4. GoK having examined the proposal has decided to release Rs. 5.00 crores (Rupees Five Crores only) as its share of the above projects. Hence this order.

**G. O. No. IDD 47 NSW 2003 (P): BANGALORE: DATED: 26th March 2004**

1. In the circumstances explained in the Preamble, GoK are pleased to release an amount of Rs. 5.00 Crores (Rupees Five Crores Only) to the MoR, GoI towards the share of expenditure for the Kottur-Harihar (New Line), Bangalore-Kengeri (Doubling) and Kengeri-Ramanagaram (Doubling) rail projects.
2. The expenditure shall be met out of the Budget Provision under the head of account "5465-01-190-3-05-211 –Cost Sharing for New Projects-investments (Plan)".
3. Managing Director, iDeCK is authorized to draw the amount on a Payee's Receipt duly countersigned by the Under Secretary to Govt., IDD and in turn issue a cheque for the amount drawn in favour of Financial Advisor & Chief Accounts Officer (Construction), South Western Railway, Bangalore.
4. This order issues with the concurrence of the Finance Dept. vide its UO Note No. FD 485/Exp-I/ 2004, dated 16-3-2004.

By Order and in the name of the Governor of Karnataka,

P.R. 396

**T.B. RENUKA PRASAD**

Under Secretary to Government, Infrastructure Development Department.